ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ: ೦೭ ೨೭ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜುಲೈ-ಸೆಪ್ಟೆಂಬರ್ ೨೦೧೩

ಸಂಚಿಕೆ: ೦೩

ಸಂಪಾದಕರು

ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯

ದೂರವಾಣಿ:
೨೬೬೧೫೮೭೭,೨೬೬೭೬೭೭೩

ಇಮೇಲ್ :
bmsritrust@gmail.com

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥,ಮಂಡ್ಯ ಜಿಲ್ಲೆ.




೨೪-೭-೨೦೧೩ ರಂದು ಬೆಳ್ಳೂರಿನಲ್ಲಿ ನಡೆದ ಶ್ರೀಶ್ರೀಶ್ರೀನಿರ್ಮಲಾನಂದನಾಥ ಸ್ವಾಮೀಜಿ ಅವರಿಗೆ ಸನ್ಮಾನ ಹಾಗೂ ಅಭಿನಂದನಾ ಕಾರ್ಯಕ್ರಮ

೨೪-೭-೨೦೧೩ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಳ್ಳೂರಿನ ಘಟಕದ ಸಹಯೋಗದಲ್ಲಿ ಆದಿ ಚುಂಚನಗಿರಿ ಮಹಾ ಸಂಸ್ಥಾನದ ನೂತನ ಪೀಠಾಧ್ಯಕ್ಷರಾದ ಶ್ರೀಶ್ರೀಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಅವರನ್ನು ಅಭಿನಂದಿಸಿ, ಸನ್ಮಾನದ ಕಾರ್ಯಕ್ರಮ ಹಮ್ಮಿಕೊಂಡಿತ್ತು. ಈ ಕಾರ್ಯಕ್ರಮವನ್ನು ಶತಾಯುಷಿ ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರ ಶತಮಾನೋತ್ಸವ ಆಚರಣೆ ಅಂಗವಾಗಿ ಏರ್ಪಡಿಸಲಾಗಿತ್ತು. ಗೌ॥ ಅಧ್ಯಕ್ಷ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಬೆಳ್ಳೂರು ಘಟಕ ಪ್ರತಿಷ್ಠಾನದ ಅಧ್ಯಕ್ಷ ಶ್ರೀ ಎಸ್. ಕೃಷ್ಣರಾವ್ ಕಾರ್ಯದರ್ಶಿ ಎನ್. ಸೋಮಸುಂದರ್ ಮುಂತಾದ ವರು ಶ್ರೀಶ್ರೀಶ್ರೀ ನಿರ್ಮಲಾ ನಂದನಾಥ ಸ್ವಾಮೀಜಿ ಅವರನ್ನು ಅಭಿನಂದಿಸಿ ಸನ್ಮಾನಿಸಲು ಸಹಯೋಗ ನೀಡಿದರು. ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರ ಬಗ್ಗೆ ಡಾ॥ ವಿಜಯಾ ಸುಬ್ಬರಾಜ್ ರಚಿಸಿದ್ದ ಕವನ ವಾಚಿಸಿದರು. ಬೆಳ್ಳೂರು ಘಟಕದ ಶ್ರೀ ಎ.ಆರ್. ಸಿಂಗ್‌ರವರು ಶ್ರೀಶ್ರೀಶ್ರೀ ಅವರ ಬಗ್ಗೆ ಅಭಿನಂದನಾ ಭಾಷಣ ಮಾಡಿದರು. ಬಿ.ಎಂ.ಶ್ರೀ. ಅವರ ಬಗ್ಗೆ ಶ್ರೀ ತೈಲೂರು ವೆಂಕಟಕೃಷ್ಣ ಉಪನ್ಯಾಸ ನೀಡಿದರು. ಶ್ರೀಶ್ರೀಶ್ರೀ ಅವರು ಕೊನೆಯಲ್ಲಿ ಆಶೀರ್ವಚನ ನೀಡಿದರು. ಶ್ರೀ ಸೋಮಶೇಖರ್ ಅವರು ಬೆಳ್ಳೂರಿನ ಘಟಕದ ಉಗಮ ಮತ್ತು ನಿರ್ವಹಣೆ ಬಗ್ಗೆ ಮಾಹಿತಿ ನೀಡಿದರು.




೨೪-೭-೨೦೧೩ ರಂದು ಬೆಳ್ಳೂರಿನಲ್ಲಿ ನಡೆದ ಕಾರ್ಯಕ್ರಮ ಶ್ರೀಶ್ರೀಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಅವರಿಗೆ ಸನ್ಮಾನ ಹಾಗೂ ಅಭಿನಂದನಾ ಕಾರ್ಯಕ್ರಮ

## ಸಂಪಾದಕೀಯ

ಎಂ. ವಿ. ಸೀತಾರಾಮಯ್ಯನವರ ಅತ್ಯಂತ ಪ್ರಿಯವಾಗಿದ್ದ ಹಸ್ತಪ್ರತಿ ಅಧ್ಯಯನ, ಸಂರಕ್ಷಣೆಗೆ, ಸಂಶೋಧನೆಗೆ, ಸಂಪಾದನೆಗೆ ಆದ್ಯತೆ ಕೊಡುತ್ತಿರುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರತಿ ವರ್ಷವೂ ಕರ್ನಾಟಕದ ಪ್ರಮುಖ ಸ್ಥಳಗಳಲ್ಲಿ ವಾರ್ಷಿಕ ಸಮಾವೇಶ ಆಯೋಜಿಸುತ್ತಿದೆ. ಮೊದಲನೆ ಸಮಾವೇಶ ಉಡುಪಿಯ ಬಳಿಯ ಉಜಿರೆಯಲ್ಲಿ ನಡೆಯಿತು. ೨ನೇ ಸಮಾವೇಶ ಶಿವಮೊಗ್ಗ ಜಿಲ್ಲೆಯ ಶ್ರೀರಾಮಚಂದ್ರಾಪುರದಲ್ಲಿ ನಡೆಯಿತು. ೩ನೇ ಸಮಾವೇಶ ತುಮಕೂರಿನಲ್ಲಿ ತುಮಕೂರು ವಿಶ್ವವಿದ್ಯಾನಿಲಯದ ಸಹಕಾರದೊಡನೆ ನಡೆಯಲಿದೆ.

ಹಸ್ತಪ್ರತಿಗೆ ಸಂಬಂಧಿಸಿದಂತೆ ಪ್ರತಿ ವರ್ಷದಂತೆ ಈ ವರ್ಷವೂ ತರಬೇತಿ ಶಿಬಿರ, ಹಸ್ತಪ್ರತಿ ಶಾಸನ ಅಧ್ಯಯನ ಪ್ರವಾಸ ಆಯೋಜಿಸಲಾಗುತ್ತಿದೆ. ಪೂರ್ಣ ವಿವರಗಳನ್ನು ಪತ್ರಿಕಾ ಪ್ರಕಟಣೆಯಲ್ಲಿ ನೀಡಲಾಗುವುದು. ನಾಲ್ಕು ತಿಂಗಳ ತರಬೇತಿ ಶಿಬಿರದಲ್ಲಿ ಭಾಗವಹಿಸುವ ಆಸಕ್ತರು ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದು. ಪಾಲ್ಗೊಂಡ ಎಲ್ಲರಿಗೂ ಅರ್ಹತಾಪತ್ರ ನೀಡಲಾಗುವುದು.

ಈ ವರ್ಷ ಶತಾಯುಷಿ ಸಾಹಿತಿಗಳಾದ ಈ ಕೆಳಕಂಡವರ ಬಗ್ಗೆ ಅವರ ಜೀವನ ಮತ್ತು ಕೊಡುಗೆಗಳ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿ ಅನಂತರ ಒಂದೊಂದು ಕಿರುಹೊತ್ತಿಗೆಯನ್ನು ಪ್ರಕಟಿಸಲಾಗುತ್ತಿದೆ. ಶತಾಯುಷಿ (೧೯೧೨-೨೦೧೨) ನಾಡೋಜ ಜಿ. ವೆಂಕಟಸುಬ್ಬಯ್ಯ, ಪ್ರೊ॥ ರಂ. ಶ್ರೀ ಮುಗಳಿ, ಜಯದೇವಿತಾಯಿ ಲಿಗಾಡಿ. ಕೈವಾರ ರಾಜಾರಾವ್, ಬೀಚಿ, ಹೆಚ್. ವಿ. ಸಾವಿತ್ರಮ್ಮ, ಬಿ. ಶ್ರೀ. ಪಾಂಡುರಂಗರಾವ್, ಜಿ. ವಿ. ನಾರಾಯಣಮೂರ್ತಿ, ಎಚ್. ದೇವಿರಪ್ಪ, ಗೌರೀಶ್ ಕಾಯ್ಕಿಣಿ, ವಿ. ಎಂ. ಇನಾಂದಾರ್ ಮುಂತಾದವರು.

ಕೇಂದ್ರ ಸಾಹಿತ್ಯ ಅಕಾಡೆಮಿ ಸಹಯೋಗದಲ್ಲಿ 'ಈ ಶತಮಾನದ ಕನ್ನಡ ಸಾಹಿತ್ಯ' 'ಹಿರಿಯರ ನೆಲೆ-ಕಿರಿಯರ ಬೆಳೆ' ಡಿಸೆಂಬರ್ ೧, ೨೦೧೩ ರಂದು ವಿಶೇಷ ಕಾರ್ಯಕ್ರಮ ಆಯೋಜಿಸಲಾಗುತ್ತಿದೆ. ಆಸಕ್ತರು ಭಾಗವಹಿಸಬಹುದು.

'ಸಂಶೋಧನಾತ್ಮಕ ಪ್ರಬಂಧ ಸ್ಪರ್ಧೆ' ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ನಡೆಯಲಿದೆ. ಪ್ರಬಂಧಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ ೩೧-೧೧-೨೦೧೩. ಪ್ರತಿ ವರ್ಷದಂತೆ ಈ ವರ್ಷವೂ ಪ್ರತಿಷ್ಠಾನದ ಸದಸ್ಯರುಗಳಿಗೆ ಒಂದು 'ಕವಿಗೋಷ್ಠಿ' ಕಾರ್ಯಕ್ರಮ ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಏರ್ಪಡಿಸಿದೆ. ಆಸಕ್ತರು ವಿವರಗಳಿಗೆ ಪ್ರತಿಷ್ಠಾನವನ್ನು ಸಂಪರ್ಕಿಸಬೇಕಾಗಿ ವಿನಂತಿ.

**-ಎಸ್. ವಿ. ಶ್ರೀನಿವಾಸರಾವ್**
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

೧೮-೭-೨೦೧೩ 'ಕನ್ನಡ ಸಾಹಿತ್ಯೋಪಾಸಕರು ಲೇಖನ ಮಾಲೆಯಡಿ ಇಬ್ಬರು ಪ್ರಮುಖ ಸಾಹಿತಿಗಳ ಬಗ್ಗೆ ಉಪನ್ಯಾಸ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಪ್ರೊ॥ ಎಸ್.ವಿ. ಪರಮೇಶ್ವರ ಭಟ್ಟ ಅವರ ಕೃತಿಗಳ ಬಗ್ಗೆ ಖ್ಯಾತ ವಿಮರ್ಶಕ ಡಾ॥ ಆರ್. ಲಕ್ಷ್ಮೀನಾರಾಯಣರವರು 'ಮುಮ್ಮಡಿ ಕೃಷ್ಣರಾಜ ಒಡೆಯರ್' ಬಗ್ಗೆ, ಕನ್ನಡ ಪ್ರಾಧ್ಯಾಪಕ ಡಾ॥ ಕೆ. ವಿ ಅನಂತ ಪದ್ಮನಾಭ ಉಪನ್ಯಾಸಗಳನ್ನು ನೀಡಿದರು. ಡಾ। ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಗೌ॥ ಕಾರ್ಯದರ್ಶಿಗಳಾದ ಶ್ರೀಎಸ್.ವಿ. ಶ್ರೀನಿವಾಸರಾವ್ ಸಾಹಿತ್ಯೋಪಾಸಕರು ಲೇಖನ ಮಾಲೆಯ ಬಗ್ಗೆ ಪ್ರಾಸ್ತಾವಿಕವಾಗಿ ಮಾತನಾಡಿ ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಅಬ್ದುಲ್ ಬಷೀರ್ ಮುಖ್ಯ ಅತಿಥಿಗಳ ಪರಿಚಯ ಮಾಡಿಕೊಟ್ಟರು.




೧೮-೭-೨೦೧೩ ರಂದು ಗುರುವಾರ ಸಂಜೆ ೬-೦೦ ಗಂಟೆಗೆ ನಡೆದ ಸಾಹಿತ್ಯೋಪಾಸಕರು ಲೇಖನಮಾಲೆ ಕಾರ್ಯಕ್ರಮ ಉಪನ್ಯಾಸಕರು : ಖ್ಯಾತ ವಿಮರ್ಶಕರಾದ ಡಾ. ಆರ್. ಲಕ್ಷ್ಮೀನಾರಾಯಣ

೨೦-೭-೨೦೧೩ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ 'ಸಿರಿಸಂಗೀತ' ಏರ್ಪಡಿಸಲಾಗಿತ್ತು. ಖ್ಯಾತ ಗಾಯಕ ಶ್ರೀ ಅಪ್ಪಗೆರೆ ತಿಮ್ಮರಾಜು ಹಾಗೂ ಸಂಗಡಿಗರು ಈ ಅಭೂತ




೨೦-೭-೨೦೧೩ ರಂದು ಸಂಜೆ ೬-೦೦ ಗಂಟೆಯಿಂದ ನಡೆದ 'ಸಿರಿ ಸಂಗೀತ' ಕಾರ್ಯಕ್ರಮ.
ಗಾಯನ : ಖ್ಯಾತ ಗಾಯಕ ಶ್ರೀ ಅಪ್ಪಗೆರೆ ತಿಮ್ಮರಾಜು

ಪೂರ್ವ ಕಾರ್ಯಕ್ರಮ ನಡೆಸಿಕೊಟ್ಟರು. ಶ್ರೀ ಎಸ್. ವಿ. ಶ್ರೀನಿವಾಸರಾವ್ ಅಧ್ಯಕ್ಷತೆ ವಹಿಸಿದ್ದರು ಪ್ರೊ॥ ಅಬ್ದುಲ್ ಬಷೀರ್ ಗಾಯಕರುಗಳ ಪರಿಚಯಮಾಡಿಕೊಟ್ಟರು.

೨೫-೭-೨೦೧೩ ಶ್ರೀ ಸಿ. ಕೆ. ನಾಗರಾಜ್ ಸ್ಮಾರಕ ದತ್ತಿ ಕಾರ್ಯಕ್ರಮ ನಡೆಯಿತು. ಖ್ಯಾತ ಕಾದಂಬರಿಕಾರ, ಪ್ರಾಧ್ಯಾಪಕ ಡಾ॥ ಸುರೇಶ್ ಪಾಟೀಲ ಅವರು 'ಕನ್ನಡ ಐತಿಹಾಸಿಕ ಕಾದಂಬರಿ, ತಾಂತ್ರಿಕ ನೆಲೆಗಳು' ಬಗ್ಗೆ ಉಪನ್ಯಾಸ ನೀಡಿದರು. ಡಾ॥ ಪಿ. ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಸಿ. ಕೆ. ನಾಗರಾಜರಾವ್ ಅವರ ಬಗ್ಗೆ ಮಾಹಿತಿ ನೀಡಿ, ಅವರ ಅಪೂರ್ವ ಬಹುಮುಖ



೨೫-೭-೨೦೧೩ ಸಿ. ಕೆ. ನಾಗರಾಜರಾವ್ ದತ್ತಿ ಕಾರ್ಯಕ್ರಮ

ಪ್ರತಿಭೆಯನ್ನು ಶ್ಲಾಘಿಸಿ, ಅತಿಥಿಗಳನ್ನು ಸ್ವಾಗತಿಸಿದರು. ಪ್ರೊ॥ ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ಮಾಡಿದರು.

**೨೯-೭-೨೦೧೩ ಶ್ರೀ ಎಂ. ಜಿ. ನಂಜುಂಡಾರಾಧ್ಯ ಮತ್ತು ಟಿ. ಎನ್. ಮಹದೇವಯ್ಯ ಸ್ಮಾರಕ ದತ್ತಿ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.** ಪ್ರಾರಂಭದಲ್ಲಿ ಗೌ॥ ಕಾರ್ಯದರ್ಶಿ ಶ್ರೀ



೨೯-೭-೨೦೧೩ ಎಂ. ಜಿ. ನಂಜುಂಡಾರಾಧ್ಯ ಮತ್ತು ಟಿ. ಎನ್. ಮಹದೇವಯ್ಯ ದತ್ತಿ ಕಾರ್ಯಕ್ರಮ

ಎಸ್. ವಿ. ಶ್ರೀನಿವಾಸರಾವ್ ಮೇಲ್ಕಂಡ ದತ್ತಿ ದಾನಿಗಳ ಬಗ್ಗೆ ಮಾಹಿತಿ ನೀಡಿ ಎಲ್ಲರನ್ನೂ ಸ್ವಾಗತಿಸಿದರು. ಪ್ರೊ॥ ಅಬ್ದುಲ್ ಬಷೀರ್ ಉಪನ್ಯಾಸಕರಾದ ಪ್ರೊ॥ ಎಸ್. ರಾಮಲಿಂಗೇಶ್ವರ (ಸಿಸಿರಾ) ಹಾಗೂ ಅಧ್ಯಕ್ಷರಾದ ಪಿ. ವಿ. ನಾರಾಯಣ ಬಗ್ಗೆ ಪರಿಚಯ ಮಾಡಿಕೊಟ್ಟರು. ಸಿಸಿರಾ ಅವರು 'ವಚನಸಾಹಿತ್ಯ' ಕುರಿತು ಭಾಷಣ ನೀಡಿದರು. ಅಧ್ಯಕ್ಷ ಡಾ॥ ಪಿ.ವಿ. ನಾರಾಯಣ ಅಧ್ಯಕ್ಷ ಭಾಷಣ ಮಾಡಿ, ಅತಿಥಿಗಳಿಗೆ ಪ್ರತಿಷ್ಠಾನದ ನೆನಪಿನ ಕಾಣಿಕೆ ನೀಡಿ ಅಭಿನಂದಿಸಿದರು.

**೩೦-೭-೨೦೧೩ ರಂದು ಡಾ॥ ನಿರೂಪಮಾ ಮತ್ತು ಡಾ॥ ಕೆ. ವಿ. ರಮೇಶ್ ಅವರುಗಳ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಆಯೋಜಿಸಿತ್ತು.** ಪ್ರೊ॥ ಎಂ. ಎಚ್. ಕೃಷ್ಣಯ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತಿನ ಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಮಕ್ಕಳ ಸಾಹಿತ್ಯ ಪರಿಷತ್ತಿನ ಸ್ಥಾಪನೆ ಮತ್ತು ಬೆಳವಣಿಗೆಗೆ ಕಾರಣಕರ್ತರಾಗಿದ್ದ ಶ್ರೀಮತಿ ನಿರುಪಮಾ ಅವರ ಜೀವನ ಮತ್ತು ಸಾಧನೆ ಬಗ್ಗೆ ವಿವರ ನೀಡಿ ಅವರ ನಿಧನಕ್ಕೆ ಅಶ್ರುತರ್ಪಣ ಅರ್ಪಿಸಿದರು. ಅನಂತರ ಡಾ॥ ಪಿ. ವಿ. ನಾರಾಯಣ ಡಾ॥ ಮುಳುಕುಂಟೆ ರಮೇಶ್, ಟಿ. ಎಸ್.




೩೦-೭-೨೦೧೩ ಡಾ॥ ನಿರುಪಮಾ ಅವರ ಶ್ರದ್ಧಾಂಜಲಿ ಕಾರ್ಯಕ್ರಮ

ರಾಮರಾವ್, ಡಾ॥ ವಿಜಯಾ ಸುಬ್ಬರಾಜ್, ಮಾರ್ಕಂಡಪುರಂ ಶ್ರೀನಿವಾಸ್, ಡಾ॥ ನಿರುಪಮಾರವರ ಹಿರಿಯಮಗ ಸುಧೀಂದ್ರನಾಥ್ ಮೃತರಿಗೆ ಶ್ರದ್ಧಾಂಜಲಿ ಅರ್ಪಿಸಿದರು. ಡಾ॥ ಶ್ಯಾಮಲಾ ರತ್ನಕುಮಾರಿ, ಡಾ॥ ಪಿ.ವಿ. ಕೃಷ್ಣಮೂರ್ತಿ, ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ಪಿ.ವಿ. ನಾರಾಯಣ ಅವರು, ಖ್ಯಾತ ಸಂಶೋಧಕ, ಶಾಸನ ತಜ್ಞ, ಸಂಸ್ಕೃತ ವಿದ್ವಾಂಸರಾಗಿದ್ದ ಪ್ರಾಚ್ಯವಸ್ತು ಇಲಾಖೆಯಲ್ಲಿ ಪ್ರಮುಖ ಅಧಿಕಾರ ವಹಿಸಿದ್ದ ಡಾ॥ ಕೆ. ವಿ. ರಮೇಶ್ ಅವರ ಬಗ್ಗೆ ಮಾತನಾಡಿ ಶ್ರದ್ಧಾಂಜಲಿ ಅರ್ಪಿಸಿದರು.

**೫-೮-೨೦೧೩ ಸೋಮವಾರ ಸಂಜೆ ೬-೦೦ ಗಂಟೆಗೆ 'ಸಿರಿಕಂಟ' ವೇದಿಕೆ ವತಿಯಿಂದ ಕಾರ್ಯಕ್ರಮ ಏರ್ಪಡಿಸಲಾಗಿತ್ತು.** 'ಕನ್ನಡ ಹಸ್ತಪ್ರತಿ ಬರವಣಿಗೆಯ ವೈವಿಧ್ಯತೆ' ಬಗ್ಗೆ ವಿಜಯನಗರ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಡಾ॥ ಎನ್. ಆರ್. ಲಲಿತಾಂಬ ಅವರು ಸ್ಲೈಡ್‌ಗಳ ಮೂಲಕ ಹಸ್ತಪ್ರತಿಗಳ ಬರವಣಿಗೆಯ ವೈವಿಧ್ಯತೆಯನ್ನು ವಿವರಿಸಿದರು. ಉತ್ತಮ ಮಾಹಿತಿಯ ಪ್ರಾತ್ಯಕ್ಷತೆ ಸಭಿಕರನ್ನು ರಂಜಿಸಿತು. ಡಾ॥ ಪಿ. ವಿ. ನಾರಾಯಣ ಅಧ್ಯಕ್ಷತೆ ವಹಿಸಿ, ಅತಿಥಿಗಳಿಗೆ ಪ್ರತಿಷ್ಠಾನದ ನೆನಪಿನ ಕಾಣಿಕೆ ನೀಡಿ ಅಭಿನಂದಿಸಿದರು.



# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ).

ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯

## ೩೩ನೇ ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರ

ಮಾನ್ಯರೇ,

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮುವತ್ತಮೂರನೆಯ ಸರ್ವಸದಸ್ಯರ ಸಭೆಯನ್ನು ದಿನಾಂಕ: ೨೫-೧೨-೨೦೧೩ ನೇ ಬುಧವಾರ ಬೆಳಗ್ಗೆ ೧೦-೩೦ಕ್ಕೆ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲು ತೀರ್ಮಾನವಾಗಿದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕಾಗಿ ವಿನಂತಿಸುತ್ತೇವೆ.

### ಕಾರ್ಯಸೂಚಿ

೧. ಪ್ರಾರ್ಥನೆ, ಸ್ವಾಗತ ಮತ್ತು ಅಗಲಿದ ಸದಸ್ಯರಿಗೆ ಸಂತಾಪ ಸೂಚಿಸುವುದು.
೨. ಸರ್ವಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಓದಿ ಸ್ಥಿರೀಕರಿಸುವುದು.
೩. ೨೦೧೨-೧೩ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು.
೪. ೨೦೧೨-೧೩ನೇ ಸಾಲಿನ ಲೆಕ್ಕಪರಿಶೋಧಕರು ನೀಡಿರುವ ಆಯ-ವ್ಯಯ ಲೆಕ್ಕ ತಃಖ್ತೆಗಳನ್ನು ಅನುಮೋದಿಸುವುದು.
೫. ೨೦೧೩-೧೪ನೇ ಸಾಲಿನ ಅಂದಾಜು ಆಯ-ವ್ಯಯ ಪಟ್ಟಿಯನ್ನು ಅನುಮೋದಿಸುವುದು.
೬. ೨೦೧೩-೧೪ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ ಮಾಡುವುದು.
೭. ನಿಯಮಾನುಸಾರ ನಿವೃತ್ತರಾಗಲಿರುವ ಕಾರ್ಯಸಮಿತಿ ಸದಸ್ಯರ ಸ್ಥಾನಗಳಿಗೆ ಚುನಾವಣೆ ನಡೆಸುವುದು.
೮. ಸದಸ್ಯರು ಕಳುಹಿಸಿರುವ ಸಲಹೆ ಸೂಚನೆಗಳ ಪರಿಶೀಲನೆ
೯. ಇತರೆ ವಿಚಾರಗಳು (ಅಧ್ಯಕ್ಷರ ಒಪ್ಪಿಗೆಯಿಂದ).
೧೦. ಅಧ್ಯಕ್ಷರ ಭಾಷಣ, ೧೧. ವಂದನಾರ್ಪಣೆ.

**ಕಾರ್ಯಸಮಿತಿಯ ಅಪ್ಪಣೆಯ ಮೇರೆಗೆ**

ದಿನಾಂಕ : ೨-೧೨-೨೦೧೩

ಎಸ್. ವಿ. ಶ್ರೀನಿವಾಸರಾವ್
ಗೌರವ ಕಾರ್ಯದರ್ಶಿ

ಪ್ರೊ|| ಜಿ. ಅಬ್ದುಲ್ ಬಷೀರ್
ಗೌರವ ಕಾರ್ಯದರ್ಶಿ

**ವಿಶೇಷ ಸೂಚನೆ**

೧. ಸದಸ್ಯತ್ವ ಬಾಕಿ ಇರುವವರು ಅವಧಿ ಮುಗಿದ ಒಂದು ತಿಂಗಳೊಳಗೆ ಪಾವತಿ ಮಾಡಿರಬೇಕು.
೨. ಅಗತ್ಯ ಸಂಖ್ಯೆ 'ಕೋರಂ' ಇಲ್ಲದಿದ್ದಲ್ಲಿ ಸಭೆಯು ಅರ್ಧ ಗಂಟೆ ನಂತರ ಆರಂಭವಾಗುತ್ತದೆ.
೩. ಸದಸ್ಯರು ಕಳುಹಿಸುವ ಸಲಹೆ ಸೂಚನೆಗಳು ಒಂದು ವಾರಕ್ಕೆ ಮುಂಚೆ ತಲುಪಬೇಕು.
೪. ಇಳಿಹೊತ್ತು ಉಪಹಾರವಿರುತ್ತದೆ.
೫. ಆಯ-ವ್ಯಯ ಲೆಕ್ಕ ವಿವರ ಮತ್ತು ಆಡಳಿತ ವರದಿಯ ಪ್ರತಿಗಳನ್ನು ಪ್ರತಿಷ್ಠಾನದ ಕಛೇರಿ ಸಮಯದಲ್ಲಿ ಬೆಳಿಗ್ಗೆ ೧೦-೩೦ ರಿಂದ ೧-೩೦, ಸಂಜೆ ೪-೩೦ ರಿಂದ ೭-೩೦ರೊಳಗೆ ಪಡೆಯಬಹುದು ಅಥವಾ ಅಲ್ಲೇ ಪರಿಶೀಲಿಸಬಹುದು.

**ಪ್ರತಿಷ್ಠಾನದ ಸದಸ್ಯರಿಗೆ ಮಾತ್ರ ಪ್ರವೇಶ**




೧೧-೮-೨೦೧೩ ರಂದು 'ಪ್ರಾಚೀನ ಕನ್ನಡ ಸಾಹಿತ್ಯ ಕಮ್ಮಟ' ಕಾರ್ಯಕ್ರಮದ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾದ ಮುಖ್ಯಮಂತ್ರಿ ಚಂದ್ರು ಅವರನ್ನು ಸನ್ಮಾನಿಸುತ್ತಿರುವುದು




೨೪-೮-೨೦೧೩ ರಂದು ನಡೆದ ಶ್ರೀ ಅನಂತರಂಗ ದತ್ತಿ ಮತ್ತು ಶ್ರೀ ಚಂದ್ರಶೇಖರ ಶರ್ಮ ದತ್ತಿ ಕಾರ್ಯಕ್ರಮ

**೧೧-೮-೨೦೧೩ 'ಪ್ರಾಚೀನ ಕನ್ನಡ ಸಾಹಿತ್ಯ ಕಮ್ಮಟ ಸಮಾರೋಪ' ಸಮಾರಂಭ ಭಾನುವಾರ ೩-೩೦ ಗಂಟೆಯಿಂದ ಏರ್ಪಡಿಸಲಾಗಿತ್ತು.** ಸಮಾವೇಶದಲ್ಲಿ ಸುಮಾರು ೮೦ಕ್ಕೂ ಹೆಚ್ಚು ಅಭ್ಯರ್ಥಿಗಳು ಭಾಗವಹಿಸಿದ್ದರು. ಸಾಹಿತ್ಯ ಕಮ್ಮಟದಲ್ಲಿ ಭಾಗವಹಿಸಿದ್ದ ಅಭ್ಯರ್ಥಿಗಳಿಗೆ ಪ್ರೊ|| ಅ. ರಾ. ಮಿತ್ರ ಪ್ರಮಾಣಪತ್ರ ವಿತರಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮುಖ್ಯಮಂತ್ರಿ ಚಂದ್ರು ಸಮಾರೋಪ ಭಾಷಣ ಮಾಡಿ ಪ್ರತಿಷ್ಠಾನದ ಪ್ರಗತಿಗೆ ತಮ್ಮ ಪ್ರಾಧಿಕಾರದ ವತಿಯಿಂದ ಆಗುವ ಸಹಾಯವನ್ನು ಮಾಡುವ ಆಶ್ವಾಸನೆಯನ್ನು ನೀಡಿದರು. ಪ್ರೊ|| ಎಂ. ಎಚ್. ಕೃಷ್ಣಯ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರಾರಂಭದಲ್ಲಿ ಪ್ರಾಸ್ತಾವಿಕ ಭಾಷಣ ಮಾಡಿದ ಪ್ರತಿಷ್ಠಾನದ ಅಧ್ಯಕ್ಷ ಡಾ|| ಪಿ. ವಿ. ನಾರಾಯಣ ಮುಖ್ಯಮಂತ್ರಿಚಂದ್ರು ಅವರು ಪ್ರತಿಷ್ಠಾನದ ಗ್ರಂಥಾಲಯಕ್ಕೆ ೫ ಲಕ್ಷ ರೂ. ಕೊಡುಗೆ ನೀಡಿದ್ದುದನ್ನು ನೆನಪಿಸಿಕೊಂಡು ಅವರಿಗೆ ಹಾರ್ದಿಕ ಅಭಿನಂದನೆ ಹಾಗೂ ಶುಭಾಶಯ ಕೋರಿದರು. ಶ್ರೀ ಎಸ್. ವಿ. ಶ್ರೀನಿವಾಸರಾವ್ ವಂದನಾರ್ಪಣೆ ಮಾಡಿದರು.

**೨೪-೮-೨೦೧೩ ಶ್ರೀ ಅನಂತರಂಗ ಮತ್ತು ಶ್ರೀ ಬಿ. ಚಂದ್ರಶೇಖರ ಶರ್ಮ ದತ್ತಿ ಕಾರ್ಯಕ್ರಮಗಳು ಸಂಜೆ ೬-೦೦ ಯಿಂದ ನಡೆದವು.** ಕಾಲೇಜು ಶಿಕ್ಷಣ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಪ್ರೊ|| ಎಂ. ಎಸ್. ರಘುನಾಥ್, ಡಾ|| ಮ. ತಿ. ನರಸಿಂಹಚಾರ್ ಅವರ 'ಅಹಲ್ಯೆ ನಾಟಕ' ಕುರಿತು ಉಪನ್ಯಾಸ ನೀಡಿದರು. ಡಾ|| ಪಿ. ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದು ಮುಖ್ಯ ಅತಿಥಿಗಳಿಗೆ ಪ್ರತಿಷ್ಠಾನದ ವತಿಯಿಂದ ನೆನಪಿನ ಕಾಣಿಕೆ ಸಲ್ಲಿಸಿ ವಂದಿಸಿದರು. ಪ್ರಾರಂಭದಲ್ಲಿ ಗೌ|| ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ದತ್ತಿ ದಾನಿಗಳ ಬಗ್ಗೆ ಕಿರುಪರಿಚಯ ನೀಡಿ, ಎಲ್ಲರನ್ನು ಸ್ವಾಗತಿಸಿದರು. ಪ್ರೊ|| ಜಿ. ಅಬ್ದುಲ್ ಬಷೀರ್ ಪ್ರೊ|| ರಘುನಾಥ್‌ರವರ ಪರಿಚಯ ಮಾಡಿಸಿಕೊಟ್ಟರು.

**೨೬-೮-೨೦೧೩ ಸೋಮವಾರ ಸಂಜೆ ೬-೦೦ಕ್ಕೆ ಸಾಹಿತ್ಯೋಪಾಸಕರು ಲೇಖನ ಮಾಲೆಯಡಿ 'ಕೈವಾರ ರಾಜರಾಯರು ಈ ಬಗ್ಗೆ ಹಿರಿಯ ಸಂಸ್ಕೃತಿ ಚಿಂತಕ ಶ್ರೀ ಜಗನ್ನಾಥ ಹೇಮಾದ್ರಿ ಉಪನ್ಯಾಸ ನೀಡಿದರು.** ಶ್ರೀ ಜಗನ್ನಾಥ ಹೇಮಾದ್ರಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೩೦ ವರ್ಷಕ್ಕೂ ಹೆಚ್ಚು ಕಾಲ ಸೇವೆಸಲ್ಲಿಸಿ ಖ್ಯಾತರಾಗಿದ್ದಾರೆ.




೨೬-೮-೨೦೧೩ ರಂದು ನಡೆದ ಸಾಹಿತ್ಯೋಪಾಸಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ದಿವಂಗತ ಕೈವಾರ ರಾಜಾರಾಯರ ಬಂಧು ವರ್ಗ

ಡಾ|| ಪಿ. ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದು, ಅಧ್ಯಕ್ಷ ಭಾಷಣ ಮಾಡಿ ಉಪನ್ಯಾಸಕರಿಗೆ ನೆನಪಿನ ಕಾಣಿಕೆ ನೀಡಿ ವಂದಿಸಿದರು.

ಪ್ರಾರಂಭದಲ್ಲಿ ಪ್ರೊ॥ ಜಿ. ಅಬ್ದುಲ್ ಬಷೀರ್ ಅವರು ಅತಿಥಿಗಳ ಪರಿಚಯ ಮಾಡಿಕೊಟ್ಟರು.

**೩೧-೮-೨೦೧೩ ಸಂಜೆ ೬-೦೦ ಗಂಟೆಗೆ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ** 'ಸಿರಿಸಂಗೀತ' ನಡೆಯಿತು. ಖ್ಯಾತ ಗಾಯಕ ಶ್ರೀ **ಆನಂದ್ ಮಾದಲಗೆರೆ** ಅವರು ಸುಗಮ ಸಂಗೀತದಿಂದ ಶ್ರೋತೃಗಳನ್ನು ರಂಜಿಸಿದರು. ಪ್ರೊ॥ ಅಬ್ದುಲ್ ಬಷೀರ್ ಅವರು ಮುಖ್ಯ ಅತಿಥಿಗಳ ಪರಿಚಯ ಮಾಡಿಸಿ, ಎಲ್ಲರನ್ನೂ ಸ್ವಾಗತಿಸಿದರು. ಡಾ॥ ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದು ಅತಿಥಿಗಳಿಗೆ ಪ್ರತಿಷ್ಠಾನದ ನೆನಪಿನ ಕಾಣಿಕೆ ನೀಡಿ ವಂದಿಸಿದರು.

**೧೪-೯-೨೦೧೩ ಸಂಜೆ ೬-೦೦ ಗಂಟೆಗೆ ಉದಯಭಾನು ಕಲಾ ಸಂಘಕ್ಕೆ ೧೦೦೧ ಗ್ರಂಥಗಳ ಕೊಡುಗೆ** ಉದಯಭಾನು ಕಲಾ ಸಂಘದ ಅಧ್ಯಕ್ಷರಾದ ಶ್ರೀ ಬಿ. ಶ್ರೀಕೃಷ್ಣ ಅವರು ಗ್ರಂಥಗಳನ್ನು ಸ್ವೀಕರಿಸಿ ಪ್ರತಿಷ್ಠಾನಕ್ಕೆ ಕೃತಜ್ಞತೆ ಸಲ್ಲಿಸಿದರು. ಅಧ್ಯಕ್ಷತೆ ವಹಿಸಿದ್ದ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು




೧೪-೯-೨೦೧೩ ರಂದು ಉದಯಭಾನು ಕಲಾಸಂಘಕ್ಕೆ ೧೦೦೧ ಗ್ರಂಥಗಳ ಬಿಡುಗಡೆ

ಉದಯಭಾನು ಕಲಾ ಸಂಘದ ಕಾರ್ಯ ಚಟುವಟಿಕೆಗಳನ್ನು ಪ್ರಶಂಸಿಸಿ, ಅದಕ್ಕೆ ಕಾರಣಕರ್ತರಾದ ಸ್ಥಾಪಕ ಕಾರ್ಯದರ್ಶಿ ಶ್ರೀ ನರಸಿಂಹ ಅವರ ನಿಸ್ಪೃಹ ಸೇವೆಯನ್ನು ಶ್ಲಾಘಿಸಿದರು. ಪ್ರಾರಂಭದಲ್ಲಿ ಕಾರ್ಯದರ್ಶಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಎಲ್ಲರನ್ನು ಸ್ವಾಗತಿಸಿದರು.

**೧೬-೯-೨೦೧೩ ಸಂಜೆ ೬-೦೦ ಗಂಟೆಗೆ ಪ್ರೊ॥ ಎಂ.ವಿ.ಸೀ. ಪುರಸ್ಕಾರ ಪ್ರದಾನ ಸಮಾರಂಭ.** ನ್ಯಾಯಮೂರ್ತಿ




೧೬-೯-೨೦೧೩ ಪ್ರೊ॥ ಎಂ. ವಿ. ಸೀ. ಪುರಸ್ಕಾರ ಸಮಾರಂಭ

ಶ್ರೀ ಎಂ. ಜಿ. ಸದಾಶಿವ, ನಿವೃತ್ತ ನ್ಯಾಯದೀಶರು, ಕರ್ನಾಟಕ ಉಚ್ಚನ್ಯಾಯಾಲಯ, ಅವರು ಎಂ.ವಿ.ಸೀ ಪುರಸ್ಕಾರ ನಗದು ಹಣ ೧೦,೦೦೦/- ಹಾಗೂ ವಿಶೇಷ ಸ್ಮರಣಿಕೆಯನ್ನು ಉದಯಭಾನು ಕಲಾಸಂಘದ ಸ್ಥಾಪಕ ಗೌ॥ ಕಾರ್ಯದರ್ಶಿಗಳಾದ ಶ್ರೀ ಎಂ. ನರಸಿಂಹ ಅವರಿಗೆ ಪ್ರದಾನ ಮಾಡಿ ಅವರ ಅನುಪಮ ಸೇವೆಯನ್ನು ಶ್ಲಾಘಿಸಿದರು. ಗೌ॥ ಅಧ್ಯಕ್ಷರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದು ಉದಯಭಾನು ಕಲಾಸಂಘದ ಜನಪ್ರಿಯ ಹಾಗೂ ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಬರುತ್ತಿರುವುದಕ್ಕೆ ಮುಖ್ಯವಾಗಿ ಶ್ರೀ ನರಸಿಂಹ ಅವರು ಕಾರಣಕರ್ತರು ಎಂದು ಹೊಗಳಿದರು. ಎಂ.ವಿ.ಸೀ. ಪುರಸ್ಕಾರಕ್ಕೆ ಇವರೇ ಅತ್ಯಂತ ಸೂಕ್ತವ್ಯಕ್ತಿಯೆಂದು ಶ್ರೀ ಎಚ್. ಎಸ್. ದೊರೆಸ್ವಾಮಿ ಅವರ ಆಯ್ಕೆ ಸಮಿತಿಯು ಸರ್ವಾನುಮತದಿಂದ ಆರಿಸಿದೆ ಎಂದು ಕಾರ್ಯದರ್ಶಿಗಳು ಸಭೆಗೆ ತಿಳಿಸಿದರು. ಪ್ರಾರಂಭದಲ್ಲಿ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಎಲ್ಲರನ್ನು ಸ್ವಾಗತಿಸಿದರು. ಪ್ರೊ॥ ಜಿ ಅಬ್ದುಲ್ ಬಷೀರ್ ಅತಿಥಿಗಳ ವಿಸ್ತೃತ ಪರಿಚಯ ಮಾಡಿಸಿದರು. ಪ್ರತಿಷ್ಠಾನದ ಅಧ್ಯಕ್ಷರು ಪ್ರಾಸ್ತಾವಿಕವಾಗಿ ಮಾತನಾಡಿ ಉದಯಭಾನು ಕಲಾ ಸಂಘದೊಡನೆ ತಮ್ಮ ಸಂಬಂಧ ಇದ್ದುದನ್ನು ನೆನಪಿಸಿಕೊಂಡು ಶೈಕ್ಷಣಿಕ ಕ್ಷೇತ್ರದಲ್ಲಿ ಅವರು ಮಾಡುತ್ತಿರುವ ಸೇವೆಯ ಪರಿಚಯ ಮಾಡಿಸಿ ಕೊಟ್ಟರು ಹಾಗೂ ಅತಿಥಿಗಳಿಗೆ ನೆನಪಿನ ಕಾಣಿಕೆ ನೀಡಿ ವಂದಿಸಿದರು.

೨೬–೯–೨೦೧೩ ಸಂಜೆ ೬–೦೦ ಗಂಟೆಗೆ ಶ್ರೀಮತಿ ಎಂ. ಕೆ. ವಿಜಯಲಕ್ಷ್ಮಿ ಮತ್ತು ಎ. ಸುಬ್ಬಯ್ಯ ಹೆಗಡೆ ಶಾಸ್ತ್ರಿ ಸ್ಮಾರಕ ದತ್ತಿ ಕಾರ್ಯಕ್ರಮಗಳು ನಡೆದವು. ವಿಮರ್ಶಕ ಡಾ॥ ಡಿ.ಕೆ. ಚಿತ್ತಯ್ಯ ಪೂಜಾರ ಅವರು 'ಬ್ರಹ್ಮ ಶಿವನ ಸಮಯ ಪರೀಕ್ಷೆ' ಬಗ್ಗೆ ದತ್ತಿ ಉಪನ್ಯಾಸ ನೀಡಿದರು. ಪ್ರಾರಂಭದಲ್ಲಿ ಕಾರ್ಯದರ್ಶಿಗಳು ದತ್ತಿ ದಾನಿಗಳ ಕಿರುಪರಿಚಯ ಮಾಡಿಸಿ, ಸರ್ವರನ್ನು ಸ್ವಾಗತಿಸಿದರು. ಪ್ರೊ॥ ಜಿ. ಅಬ್ದುಲ್ ಬಷೀರ್ ಡಾ॥ ಪೂಜಾರ ಅವರ ಪರಿಚಯ ಮಾಡಿಸಿದರು. ಕೊನೆಯಲ್ಲಿ ಅಧ್ಯಕ್ಷತೆ ವಹಿಸಿದ್ದ ಡಾ॥ ಪಿ. ವಿ. ನಾರಾಯಣ ಅವರು ಅಧ್ಯಕ್ಷ ಭಾಷಣ ಮಾಡಿ 'ಸಮಯ ಪರೀಕ್ಷೆ'ಯ ಮೇಲೆ ವಿಶೇಷ ಮಾಹಿತಿ ನೀಡಿ, ಉಪನ್ಯಾಸಕರಿಗೆ ನೆನಪಿನ ಕಾಣಿಕೆ ನೀಡಿ ವಂದಿಸಿದರು.



೨೮–೯–೨೦೧೩ ಸಿರಿಸಂಗೀತ ಕಾರ್ಯಕ್ರಮ
ಖ್ಯಾತ ಗಾಯಕ ಕಿಕ್ಕೇರಿ ಕೃಷ್ಣಮೂತಿ ಅವರಿಂದ




೨೮–೯–೨೦೧೩ 'ಸಿರಿ ಸಂಗೀತ'
ಖ್ಯಾತ ಸುಗಮ ಸಂಗೀತ ವಿದ್ವಾನ್ ಶ್ರೀ ಕಿಕ್ಕೇರಿ ಕೃಷ್ಣಮೂರ್ತಿ ಅವರಿಂದ

೨೮–೯–೨೦೧೩ ಸಂಜೆ ೬–೦೦ ಗಂಟೆಗೆ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ 'ಸಿರಿಸಂಗೀತ'ದಡಿ 'ಸುಗಮ ಸಂಗೀತ'ವನ್ನು ಖ್ಯಾತ ರಾಷ್ಟ್ರೀಯ ಗಾಯಕ ಶ್ರೀ ಕಿಕ್ಕೇರಿ ಕೃಷ್ಣಮೂರ್ತಿ ಹಾಗೂ ಸಂಗಡಿಗರು ನಡೆಸಿಕೊಟ್ಟರು. ಕಿಕ್ಕೇರಿಯವರ ಗಾಯನವನ್ನು ಶ್ರೋತೃಗಳು ಅಸ್ವಾದಿಸಿದರು. ಶ್ರೀ ಎಸ್.ವಿ. ಶ್ರೀನಿವಾಸ ರಾವ್ ಅಧ್ಯಕ್ಷತೆ ವಹಿಸಿ, ಶ್ರೀ ಕೃಷ್ಣಮೂರ್ತಿಗಳ ಆದರ್ಶ, ಸುಗಮಸಂಗೀತ ಅಕಾಡೆಮಿಯ ಚಟುವಟಿಕೆಯನ್ನು ಪ್ರಶಂಸಿಸಿ, ಕಿಕ್ಕೇರಿಯವರು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಗಾಯಕರಾಗಿ ಕರ್ನಾಟಕಕ್ಕೆ ಹೆಸರು ತಂದಿದ್ದಾರೆಂದು ಪ್ರಶಂಸಿಸಿ, ಅವರಿಗೆ ಪ್ರತಿಷ್ಠಾನದ ನೆನಪಿನ ಕಾಣಿಕೆ ನೀಡಿ, ವಾದ್ಯವೃಂದದವರಿಗೆ ಅಭಿನಂದನೆ ಸಲ್ಲಿಸಿದರು.

೩೦–೯–೨೦೧೩ ಸಂಜೆ ೬–೦೦ ಗಂಟೆಗೆ ಪ್ರೊ॥ ಎಚ್. ದೇವೀರಪ್ಪ ಒಂದು ನೆನಪು' ವಿಶೇಷ ಕಾರ್ಯಕ್ರಮವನ್ನು ಪ್ರತಿಷ್ಠಾನ ಹಮ್ಮಿಕೊಂಡಿತ್ತು. ಪ್ರಾಸ್ತಾವಿಕ ಭಾಷಣ ಮಾಡಿದ ಸಂಶೋಧಕ ಡಾ॥ ಎಂ. ಚಿದಾನಂದಮೂರ್ತಿ, ಪ್ರೊ॥ ಎಚ್. ದೇವೀರಪ್ಪ ಅವರ ಸಾಹಿತ್ಯ ಕೊಡುಗೆಯ ಮೇಲೆ ಬೆಳಕು ಚೆಲ್ಲಿದರು. ಈ ಹಿರಿಯ ಸಾಹಿತಿಯವರ ಗ್ರಂಥ ಸಂಪಾದನೆ ಮೇಲೆ ಉಪನ್ಯಾಸವನ್ನು ಖ್ಯಾತ ಸಂಶೋಧಕ ಶ್ರೀ ಕಾರ್ತಿಕ್ ನೀಡಿ ಅನೇಕ ಮೌಲಿಕ ವಿಷಯಗಳನ್ನು ತಿಳಿಸಿದರು. ಪ್ರೊ॥ ಅಬ್ದುಲ್ ಬಷೀರ್ ಅವರು ಸರ್ವರನ್ನು ಸ್ವಾಗತಿಸಿ, ಅತಿಥಿಗಳ ಪರಿಚಯ ಮಾಡಿಸಿದರು. ಪ್ರೊ॥ ಎಂ. ಎಚ್. ಕೃಷ್ಣಯ್ಯ ಉಪನ್ಯಾಸಕರಿಗೆ ನೆನಪಿನ ಕಾಣಿಕೆ ನೀಡಿ ಅಭಿನಂದಿಸಿದರು.



೩೦–೯–೨೦೧೩ ಪ್ರೊ॥ ಎಚ್. ದೇವೀರಪ್ಪ ಒಂದು ನೆನಪು
ಉಪನ್ಯಾಸ : ಶ್ರೀ ಎಸ್. ಕಾರ್ತಿಕ್

## ಅಭಿನಂದನೆಗಳು

೧. ೨೬-೪-೨೦೧೩ **ಮಾಸ್ತಿ ಪ್ರಶಸ್ತಿ** (೨೦೧೩) ಡಾ॥ ಸಿ. ಎನ್. ಆರ್. ಸಾರಾ ಅಬೂಬಕ್ಕರ್, ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ ಅವರಿಗೆ ನೀಡಲಾಗಿದೆ.

೨. ೧೩-೫-೨೦೧೩ ಶ್ರೀ ಸಿದ್ಧರಾಮಯ್ಯ ೨೨ನೇ ಕರ್ನಾಟಕ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದಾರೆ.

೩. ೨೧-೬-೨೦೧೩ ಅ.ನ.ಕೃ. ನಿರ್ಮಾಣ ಪ್ರಶಸ್ತಿ (೨೦೧೩), ಹಾಸ್ಯನಟ ಮಾಸ್ಟರ್ ಹಿರಿಯಣ್ಣ ಮತ್ತು ಹಿರಿಯ ಪತ್ರಕರ್ತ ಶ್ರೀ ಜಿ. ಎನ್. ರಂಗನಾಥರಾವ್ ಆಯ್ಕೆಗೊಂಡಿದ್ದಾರೆ. ಜುಲೈಯಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಯಿತು.

೪. ೧೧-೭-೨೦೧೩ **ಕೇಂದ್ರಸಾಹಿತ್ಯ ಅಕಾಡೆಮಿಯ 'ಬಾಲಸಾಹಿತ್ಯ' ಪ್ರಶಸ್ತಿ** (೨೦೧೩) ಕನ್ನಡದ ಖ್ಯಾತ ಕವಿ ಸಾಹಿತಿ ಡಾ॥ ಹೆಚ್. ಎಸ್. ವೆಂಕಟೇಶಮೂರ್ತಿ ಅವರಿಗೆ ಸಂದಿದೆ.

೫. ೨೦-೮-೨೦೧೩ **'ಸಾವಿತ್ರಮ್ಮ ಪ್ರಶಸ್ತಿ'** ಕನ್ನಡ ಲೇಖಕಿಯರ ಸಂಘ ನೀಡುವ ೨೦೧೩ನೇ ಸಾಲಿನ ಪ್ರಶಸ್ತಿಗೆ ಕತೆಗಾರ್ತಿ ಶ್ರೀಮತಿ ಉಮಾರಾವ್ ಆಯ್ಕೆಗೊಂಡಿದ್ದಾರೆ.

೬. ೨೦-೮-೨೦೧೩ **ಗೋಕಾಕ್ ಪ್ರಶಸ್ತಿ** (೨೦೧೩) ಖ್ಯಾತ ಕವಿ ಡಾ॥ ನಿಸಾರ್ ಅಹಮದ್ ಅವರು ಈ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಸೆಪ್ಟಂಬರ್ ೮, ಪ್ರಶಸ್ತಿ ಪ್ರದಾನ ಮಾಡಲಾಯಿತು.

೭. ೧೧-೭-೨೦೧೩ **ಕೇಂದ್ರ ಸಾಹಿತ್ಯ ಅಕಾಡೆಮಿಯ ಯುವ ಸಮ್ಮಾನ** (೨೦೧೩) ಶ್ರೀ ಲಕ್ಕೂರು ಆನಂದ ಅವರ 'ಬಟವಾಡೆಯಾಗದ ರಸೀತಿ' ಸಂಕಲನಕ್ಕೆ ಸಂದಿದೆ.

೮. ೯-೯-೨೦೧೩ **ಖ್ಯಾತ ಸಾಹಿತಿ ಶ್ರೀ ಎಂ. ವಿ. ನಾಗರಾಜರಾವ್** ಅವರಿಗೆ 'ಸಾಹಿತ್ಯ ಸಂಪನ್ನ' ಪ್ರಶಸ್ತಿಯನ್ನು ಕ್ಯಾತಸಂತ್ರದ ಕವಿತಾ ಸಾಹಿತ್ಯ ಸಂಸ್ಥೆ ನೀಡಿ ಪುರಸ್ಕರಿಸಿದೆ.

## ಶ್ರದ್ಧಾಂಜಲಿ

೧. ೧೧-೯-೨೦೧೩ ಖ್ಯಾತ ಸಾಹಿತಿ **ಡಾ॥ ನಿರುಪಮಾ** ಅವರು ಬೆಂಗಳೂರಿನಲ್ಲಿ ನಿಧನರಾದರು ಡಾ॥ ನಿರುಪಮಾ ಅವರು ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತಿನ ಸ್ಥಾಪಕ ಅಧ್ಯಕ್ಷರಾಗಿದ್ದರು. ಇವರು ಮಕ್ಕಳ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಗಳನ್ನು ನೀಡಿರುವುದಲ್ಲದೆ ಹತ್ತಾರು ಮೌಲ್ಯಾಧಾರಿತ ಕೃತಿಗಳನ್ನು ರಚಿಸಿದ್ದಾರೆ. ಇವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೃತಿಗಳ ಸಂಖ್ಯೆ ಸುಮಾರು ೧೩೦.

೨. ಕನ್ನಡದ ಹಿರಿಯ ಲೇಖಕ **ಶ್ರೀ ಸುಧಾಕರ** (೮೦) ಅವರು ದಿನಾಂಕ ೨೧-೮-೨೦೧೩ ರಂದು ದೈವಾಧೀನರಾದರು.

೩. ೨೭-೮-೨೦೧೩ ಹಿರಿಯರ ನಾಗರೀಕ ವೇದಿಕೆ, ಬಸವನಗುಡಿ ಅಧ್ಯಕ್ಷರಾಗಿದ್ದ **ಡಾ॥ ನಾಗರಾಜ್** ಅವರು ಮದ್ರಾಸಿನಲ್ಲಿ ನಿಧನರಾದರು.

**ಅಚ್ಚಾದ ಪುಸ್ತಕ**

ತೆರೆದ-ಅಂಚೆ

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

*ಶ್ರೀಮತಿ/ಶ್ರೀ*.......................................................

..............................................................................

..............................................................................

ಮುದ್ರಕರು : **ಇಳಾ ಮುದ್ರಣ**, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು-೨೬. ೨೬೭೫೭೭೧೯